# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1808
2. ಮಾನ್ಯ ಸದಸ್ಯರ ಹೆಸರು : ಶ್ರೀ ಸಲೀಂ ಅಹಮದ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 15.03.2022
4. ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರೈತರು ಸಕ್ಕರೆ ಕಾರ್ಖಾನೆಗಳಿಗೆ ಪೂರೈಸುವ ಕಬ್ಬಿನ ಬಿಲ್ಲಿನ ಹಣವನ್ನು ಎಷ್ಟು ದಿನಗಳೊಳಗಾಗಿ ಪಾವತಿ ಮಾಡಬೇಕೆಂಬ ಕಾನೂನನ್ನು ರೂಪಿಸಲಾಗಿದೆ; ನಿಗದಿತ ಅವಧಿಯಲ್ಲಿ ಹಣವನ್ನು ರೈತರಿಗೆ ಪಾವತಿ ಮಾಡಲಾಗುತ್ತಿದೆಯೇ; | ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿದ 14 ದಿನಗಳೊಳಗಾಗಿ ರೈತರಿಗೆ ಸಕ್ಕರೆ ಕಾರ್ಖಾನೆಗಳು ಕಬ್ಬಿನ ಬಿಲ್ಲನ್ನು ಪಾವತಿ ಮಾಡಲು ಕಬ್ಬು (ನಿಯಂತ್ರಣ) ಆದೇಶ 1966 ಕಲಂ 3(3 ಎ) ರಲ್ಲಿ ನಿಯಮಿಸಲಾಗಿದೆ. ರಾಜ್ಯದ ಬಹುತೇಕ ಸಕ್ಕರೆ ಕಾರ್ಖಾನೆಗಳು ನಿಗದಿತ ಅವಧಿಯಲ್ಲಿ ರೈತರಿಗೆ ಕಬ್ಬಿನ ಬಿಲ್ಲನ್ನು ಪಾವತಿಸುತ್ತವೆ. |
| (ಆ) | ನಿಗದಿತ ಅವಧಿಯಲ್ಲಿ ರೈತರಿಗೆ ಹಣವನ್ನು ಪಾವತಿ ಮಾಡದಿದ್ದಲ್ಲಿ ಎಷ್ಟು ದಿವಸಗಳಿಂದ ಹಣ ಪಾವತಿಗೆ ಬಾಕಿ ಇರುತ್ತದೆ, ಮತ್ತು ಎಷ್ಟು ಜನ ರೈತರಿಗೆ ಪಾವತಿ ಮಾಡಬೇಕಾಗಿದೆ; | 2020-21ನೇ ಹಂಗಾಮಿನಲ್ಲಿ ಒಟ್ಟು 65 ಸಕ್ಕರೆ ಕಾರ್ಖಾನೆಗಳು ಕಾರ್ಯ ನಿರ್ವಹಿಸುತ್ತಿದ್ದು, ಸದರಿ ಸಾಲಿನ ಕಬ್ಬು ಬಿಲ್ಲನ್ನು ರೈತರಿಗೆ ಪೂರ್ಣವಾಗಿ ಪಾವತಿಸಿರುತ್ತವೆ. ಆದ್ದರಿಂದ ಯಾವುದೇ ಬಾಕಿ ಇರುವುದಿಲ್ಲ.<br><br>2021-22ನೇ ಹಂಗಾಮಿನಲ್ಲಿ ಕಬ್ಬು ಸರಬರಾಜು ಮಾಡಿದ ರೈತರಿಗೆ ದಿನಾಂಕ:28.02.2022 ರಲ್ಲಿದ್ದಂತೆ ಪಾವತಿಸಬೇಕಾದ ಕಬ್ಬು ಬಿಲ್ಲು ಮೊತ್ತ ರೂ.17173.81 ಕೋಟಿಗಳಷ್ಟಿದ್ದು, ಈ ಪೈಕಿ ರೂ.13296.82 ಕೋಟಿಗಳನ್ನು ಪಾವತಿಸಿರುತ್ತವೆ. ಇನ್ನೂ ರೂ.3878.39ಕೋಟಿಗಳಷ್ಟು ಬಾಕಿ ಇರುತ್ತದೆ. ಪಾವತಿ ಪ್ರಮಾಣವು ಶೇ.77ರಷ್ಟಿರುತ್ತದೆ. ಕೆಲವು ಕಾರ್ಖಾನೆಗಳು ಕೇಂದ್ರ ಸರ್ಕಾರ ನಿಗದಿಪಡಿಸಿರುವ ಎಫ್. ಆರ್.ಪಿ. ದರಕ್ಕೂ ಮೇಲ್ಪಟ್ಟು ಕಬ್ಬು ಬಿಲ್ಲನ್ನು ಪಾವತಿಸಿರುತ್ತದೆ. ಪ್ರಸ್ತುತ 2021-22ನೇ ಹಂಗಾಮು ಚಾಲನೆಯಲ್ಲಿರುವುದರಿಂದ ಕಾರ್ಖಾನೆಗಳು ರೈತರ ಕಬ್ಬು ಬಿಲ್ಲು ಬಾಕಿ ಮೊತ್ತವನ್ನು ಪಾವತಿಸಲು ಅವಕಾಶಗಳಿರುತ್ತವೆ. |
| ಇ | ರೈತರಿಗೆ ನಿಗದಿತ ಅವಧಿಯಲ್ಲಿ ಕಬ್ಬು ಸರಬರಾಜು ಮಾಡಿರುವ ಬಾಕಿ ಹಣವನ್ನು ಪಾವತಿ ಮಾಡದ ಕಾರ್ಖಾನೆಗಳ ವಿರುದ್ಧ ಸರ್ಕಾರ ಕೈಗೊಳ್ಳುವ ಕ್ರಮಗಳೇನು, ಹಾಗೂ ರೈತರಿಗೆ ನೀಡುವ ಪರಿಹಾರಗಳೇನು? | ಸಕ್ಕರೆ ಕಾರ್ಖಾನೆಗಳು ಬಾಕಿ ಉಳಿಸಿಕೊಂಡಿರುವ ರೈತರ ಕಬ್ಬು ಬಿಲ್ಲಿನ ಮೊತ್ತವನ್ನು ಭೂಕಂದಾಯದ ಬಾಕಿ ಎಂದು ಪರಿಗಣಿಸಿ ಏಕೆ ವಸೂಲಿ ಮಾಡಬಾರದು ಎಂದು ಕಬ್ಬು (ನಿಯಂತ್ರಣ) ಆದೇಶ 1966 ಕಲಂ 3(3) ರನ್ವಯ ಸಕ್ಕರೆ ಕಾರ್ಖಾನೆಗಳಿಗೆ ಶಾಸನಬದ್ಧ ನೋಟೀಸ್ ಗಳನ್ನು ಜಾರಿಗೊಳಿಸಲಾಗಿದೆ. ಆದಾಗ್ಯೂ, ಸಕ್ಕರೆ ಕಾರ್ಖಾನೆಗಳು ಬಾಕಿ ಮೊತ್ತವನ್ನು ನಿಗದಿತ ಸಮಯದಲ್ಲಿ ಪಾವತಿ ಮಾಡದೇ ಇದ್ದಲ್ಲಿ ಬಾಕಿ ಬಿಲ್ಲಿನ ಮೊತ್ತವನ್ನು ಭೂಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲು ಮಾಡಲು ಕಬ್ಬು (ನಿಯಂತ್ರಣ) ಆದೇಶ 1966 ಕಲಂ 3(8)ರನ್ವಯ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ವಸೂಲಾತಿ ಧೃಢೀಕರಣ ಪತ್ರಗಳನ್ನು ಹೊರಡಿಸಿ ಕಬ್ಬು ಬಿಲ್ಲು ಬಾಕಿ ವಸೂಲಾತಿಗೆ ಕ್ರಮವಹಿಸಲಾಗುವುದು. |

ಸಂಖ್ಯೆ: ಸಿಐ 38 ಎಸ್‌ಜಿಎಫ್ 2022

(ಶಂಕರ.ಬ.ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು